ಚುಕ್ಕೆ ಗುರುತಿನ ಪ್ರಶ್ನೆ

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 466 |
| ಸದಸ್ಯರ ಹೆಸರು | : | ಶ್ರೀಮತಿ ಭಾರತಿ ಶೆಟ್ಟಿ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : | 04-02-2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

****

| ಕ್ರಮ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಬೆಂಗಳೂರಿನಲ್ಲಿ ತ್ಯಾಜ್ಯ ನೀರಿನ ಸಂಸ್ಕರಣೆಯು ನಿಗಧಿತ ಮಾನದಂಡಕ್ಕೆ ಅನುಗುಣವಾಗಿದೆಯೇ; ಇಲ್ಲದಿದ್ದಲ್ಲಿ, ಕಾರಣಗಳೇನು; | ಬೆಂಗಳೂರು ಜಲಮಂಡಳಿ ಕಾಯ್ದೆ ಪ್ರಕಾರ ನೀರು ಸರಬರಾಜು ಮಾಡುವ ಪ್ರದೇಶಗಳಿಗೆ ಒಳಚರಂಡಿ ವ್ಯವಸ್ಥೆ ಅಳವಡಿಸಿ ಉತ್ಪತ್ತಿಯಾಗುವ ತ್ಯಾಜ್ಯ ನೀರನ್ನು ಸಂಸ್ಕರಣೆ ಘಟಕಗಳಿಗೆ ಸಾಗಿಸಿ ಘಟಕಗಳಲ್ಲಿ ಸಂಸ್ಕರಿಸುವುದು ಬೆಂಗಳೂರು ಜಲಮಂಡಳಿಯ ಮೂಲ ಕಾರ್ಯಭಾರವಾಗಿರುತ್ತದೆ. ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿ ಹಾಗೂ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ತ್ಯಾಜ್ಯ ನೀರಿನ ಸಂಸ್ಕರಣೆಗೆ ಮಾನದಂಡಗಳನ್ನು ನಿಗದಿಪಡಿಸಿದ್ದು, ಇವುಗಳ ಪ್ರಕಾರ ಜಲಮಂಡಳಿಯು ತ್ಯಾಜ್ಯ ನೀರನ್ನು ಶುದ್ಧೀಕರಣ ಘಟಕಗಳಲ್ಲಿ ಸಂಸ್ಕರಿಸಲಾಗುತ್ತಿದೆ. |
| ಆ. | ಬೆಂಗಳೂರಿನ ಕೆರೆಗಳ ಕಲುಷಿತಕ್ಕೆ ಸದರಿ ತ್ಯಾಜ್ಯ ನೀರು ಕಾರಣವಾಗಿರುವುದನ್ನು ಸರ್ಕಾರ ಯಾವ ರೀತಿ ಗುರುತಿಸುತ್ತಿದೆ; | ಬೆಂಗಳೂರಿನ ಕೆರೆಗಳ ಕಲುಷಿತಕ್ಕೆ ತ್ಯಾಜ್ಯ ನೀರು ಕಾರಣವಾಗಿರುವುದನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿದೆ. |
| ಇ. | ತ್ಯಾಜ್ಯ ನೀರಿನ ಸಂಸ್ಕರಣೆ ಬಗ್ಗೆ ಕೇಂದ್ರದ ಹಸಿರು ನ್ಯಾಯಾಧೀಕರಣಕ್ಕೆ ಪ್ರಕರಣ ಸಲ್ಲಿಸಿರುವ ಬಗ್ಗೆ ಸರ್ಕಾರದ ಕ್ರಮಗಳೇನು? | ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯಾಧೀಕರಣದ ಆದೇಶದಂತೆ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರದ ಅನುದಾನದಲ್ಲಿ ಕೈಗೊಂಡಿರುವ ಅಮೃತ್ ಯೋಜನೆಯಡಿಯಲ್ಲಿ 5 ಸಣ್ಣ ಪ್ರಮಾಣದ ತ್ಯಾಜ್ಯ ನೀರು ಸಂಸ್ಕರಣ ಘಟಕಗಳ ಕಾಮಗಾರಿಯನ್ನು ಅಗರಂ (35 ಎಂ.ಎಲ್.ಡಿ), ಸಾರಕ್ಕಿ (5 ಎಂ.ಎಲ್.ಡಿ), ಚಿಕ್ಕಬೇಗೂರು (5 ಎಂ.ಎಲ್.ಡಿ), ಹುಳಿಮಾವು (10 ಎಂ.ಎಲ್.ಡಿ) ಮತ್ತು ಕೆ.ಆರ್.ಪುರಂ (20 ಎಂ.ಎಲ್.ಡಿ) ಪ್ರದೇಶಗಳಲ್ಲಿ ತೆಗೆದುಕೊಳ್ಳಲಾಗಿದ್ದು, ಸದರಿ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದೆ ಹಾಗೂ ಎಲ್ಲಾ ಘಟಕಗಳು ಕಾರ್ಯಚಾಲನೆಯಲ್ಲಿರುತ್ತವೆ.<br><br>ಕೋರಮಂಗಲ ಕ್ರೀಡಾ ಸಂಕೀರ್ಣದ ಬಳಿ 210 ದಶಲಕ್ಷ ಲೀಟರ್ ದಿನಂಪ್ರತಿ ಸಾಮರ್ಥ್ಯದ ಕೊಳಚೆ ನೀರಿನ ರೇಚಕ ಯಂತ್ರದ ಸ್ಥಾವರ ಹಾಗೂ ಈ ಸ್ಥಾವರದಿಂದ ಕೋರಮಂಗಲ ಮತ್ತು ಚಲ್ಲಘಟ್ಟ ಕಣಿವೆಯಲ್ಲಿರುವ ತ್ಯಾಜ್ಯ ನೀರು ಸಂಸ್ಕರಣೆ ಘಟಕದವರೆಗೂ ರೈಸಿಂಗ್ ಕೊಳವೆ ಮಾರ್ಗ ಅಳವಡಿಸುವ ಎರಡು ಕಾಮಗಾರಿಗಳಲ್ಲಿ ರೇಚಕ ಕೇಂದ್ರದ ಕಾಮಗಾರಿಯು ಪೂರ್ಣಗೊಂಡು ಚಾಲನೆಯಲ್ಲಿರುವುದು. ರೈಸಿಂಗ್ ಕೊಳವೆ ಮಾರ್ಗದ ಕಾಮಗಾರಿಯನ್ನು ಮಾರ್ಚ್ 2021 ರಲ್ಲಿ ಪೂರ್ಣಗೊಳಿಸಿ ಚಾಲನೆಗೊಳಿಸಲಾಗುವುದು. |

...2

| | | |
|---|---|---|
| | | ವೃಷಭಾವತಿ ಮುಖ್ಯ ಕಣಿವೆಯ ಪ್ರದೇಶಗಳಲ್ಲಿ ಪರಿಸರ ಕ್ರಿಯಾ ಯೋಜನೆಯ 90 ಕಿಮೀ ಉದ್ದದ ಕೊಳವೆ ಮಾರ್ಗಗಳನ್ನು ಅಳವಡಿಸುವ ಕಾಮಗಾರಿಗಳನ್ನು ಒಟ್ಟು 4 ಪ್ಯಾಕೇಜ್‌ಗಳಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಈ ಯೋಜನೆಯ ಎಲ್ಲಾ ಕಾಮಗಾರಿಗಳು ಮುಕ್ತಾಯದ ಹಂತದಲ್ಲಿರುವುದು ಶೇಕಡ 90 ರಷ್ಟು ಪೂರ್ಣಗೊಂಡಿರುತ್ತದೆ ಹಾಗೂ ಮಾರ್ಚ್ 2021 ರೊಳಗೆ ಪೂರ್ಣಗೊಳಿಸಲಾಗುವುದು. ವೃಷಭಾವತಿ ಮುಖ್ಯ ಕಣಿವೆ ಪ್ರದೇಶದಲ್ಲಿರುವ ರಂಗನಾಥಕಾಲೋನಿಯ ಸೇತುವೆಯ ಬಳಿಯಿರುವ ಟೋಟಲ್ ಗ್ಯಾಸ್ ಕೇಂದ್ರದಿಂದ ವೃಷಭಾವತಿ ಕಣಿವೆಯ ತ್ಯಾಜ್ಯ ನೀರಿನ ಸಂಸ್ಕರಣ ಘಟಕದವರೆಗೂ ದೊಡ್ಡ ಗಾತ್ರದ ತ್ಯಾಜ್ಯ ನೀರು ಸಾಗಿಸುವ 1.6 ಕಿಮೀ ಉದ್ದದ ಕೊಳವೆ ಮಾರ್ಗ ಅಳವಡಿಸುವ ಕಾಮಗಾರಿಯನ್ನು ಪೂರ್ಣಗೊಳಿಸಲಾಗಿರುತ್ತದೆ.<br><br>ಮೆಗಾಸಿಟಿ ರಿವಾಲ್ವಿಂಗ್ ನಿಧಿಯಡಿಯಲ್ಲಿ ಒಟ್ಟು 440 ದಶಲಕ್ಷ ಲೀಟರ್ ದಿನಂಪ್ರತಿ ಸಾಮರ್ಥ್ಯದ 4 ಹೊಸ ತ್ಯಾಜ್ಯ ನೀರಿನ ಸಂಸ್ಕರಣ ಘಟಕಗಳ ಕಾಮಗಾರಿಗಳನ್ನು ವೃಷಭಾವತಿ ಕಣಿವೆ (150 ಎಂ.ಎಲ್.ಡಿ), ಕೋರಮಂಗಲ ಮತ್ತು ಚಲ್ಲಘಟ್ಟ ಕಣಿವೆ (150 ಎಂ.ಎಲ್.ಡಿ), ಹೆಬ್ಬಾಳ (100 ಎಂ.ಎಲ್.ಡಿ) ಮತ್ತು ದೊಡ್ಡಬೆಲೆ (40 ಎಂ.ಎಲ್.ಡಿ) ಗಳಲ್ಲಿ ಕೈಗೊಳ್ಳಲಾಗಿದೆ. ಈ ನಾಲ್ಕು ಘಟಕಗಳಲ್ಲಿ ದೊಡ್ಡಬೆಲೆಯ ಘಟಕವನ್ನು ಈಗಾಗಲೇ ಕಾರ್ಯಚಾಲನೆ ಮಾಡಲಾಗಿದೆ. ಉಳಿದ ಮೂರು ಘಟಕಗಳ ಕಾಮಗಾರಿಗಳು ಶೇಕಡಾ 90 ರಷ್ಟು ಪೂರ್ಣಗೊಂಡಿರುತ್ತದೆ ಹಾಗೂ ಮಾರ್ಚ್ 2021 ರೊಳಗೆ ಕಾರ್ಯಚಾಲನೆ ಮಾಡಲಾಗುವುದು.<br><br>ಮುಂದುವರೆದು, ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯಾಧೀಕರಣದ ಆದೇಶದಂತೆ ಸಂಸ್ಕರಿಸಿದ ತ್ಯಾಜ್ಯ ನೀರಿನ ಮಾನದಂಡಗಳನ್ನು ಪರಿಷ್ಕರಿಸಿ ಈ ಪರಿಷ್ಕೃತ ಮಾನದಂಡಗಳ ಪ್ರಕಾರ ನಗರದ ಕೋರಮಂಗಲ ಮತ್ತು ಚಲ್ಲಘಟ್ಟ ಕಣಿವೆಯ ಎಲ್ಲಾ ಹಳೆಯ ಶುದ್ಧೀಕರಣ ಘಟಕಗಳ ಉನ್ನತೀಕರಣ ಕಾಮಗಾರಿಗಳನ್ನು ಸಮರೋಪಾದಿಯಲ್ಲಿ ಕೈಗೊಂಡು ಪೂರ್ಣಗೊಳಿಸುವಂತೆ ನಿರ್ದೇಶನ ನೀಡಿತ್ತು. ಇದರ ಪ್ರಕಾರ ಜಲಮಂಡಳಿಯು ಚಾಲನೆ ಮಾಡುತ್ತಿರುವ ಹಳೆಯ ತ್ಯಾಜ್ಯ ನೀರು ಶುದ್ಧೀಕರಣ ಘಟಕಗಳನ್ನು ಉನ್ನತೀಕರಿಸುವ ಸಲುವಾಗಿ ಪ್ರಾರಂಭದಲ್ಲಿ ಕೋರಮಂಗಲ ಮತ್ತು ಚಲ್ಲಘಟ್ಟ (248 ಎಂ.ಎಲ್.ಡಿ) ಮುಖ್ಯ ಕಣಿವೆಯಲ್ಲಿರುವ ಘಟಕಗಳ ಕಾಮಗಾರಿಗಳ ಬಗ್ಗೆ ವಿಸ್ತೃತ ಯೋಜನಾ ವರದಿ ತಯಾರಿಸಲು ಸಮಾಲೋಚಕರನ್ನು ನೇಮಿಸಲಾಗಿದೆ. ಶೀಘ್ರದಲ್ಲಿ ಈ ಕಾಮಗಾರಿಗೆ ಟೆಂಡರ್ ಕರೆಯಲಾಗುವುದು. ಈ ಕಾಮಗಾರಿಗಳನ್ನು 2 ವರ್ಷಗಳಲ್ಲಿ ಪೂರ್ಣಗೊಳಿಸಲು ಅಂದಾಜಿಸಲಾಗಿದೆ. ಈ ಯೋಜನೆಗೆ ರಾಜ್ಯ ಸರ್ಕಾರದಿಂದ ಎಸ್ಕ್ರೋ ಖಾತೆಯ ಪ್ರಕಾರ ರೂ.200 ಕೋಟಿ ಅನುದಾನ ಮಂಜೂರಾಗಿರುತ್ತದೆ. ಉಳಿದ ಹಣವನ್ನು ಬೆಂಗಳೂರು ಜಲ ಮಂಡಳಿಯು ತನ್ನ ಸಂಪನ್ಮೂಲಗಳಿಂದ ಭರಿಸಲಿದೆ. |

| | | |
|---|---|---|
| | | ಬೆಂಗಳೂರು ನಗರದ ಇತರೆ ಮುಖ್ಯ ಕಣಿವೆಗಳಾದ ವೃಷಭಾವತಿ, ಕೋರಮಂಗಲ – ಚಲ್ಲಘಟ್ಟ ಮತ್ತು ಹೆಬ್ಬಾಳ ಪ್ರದೇಶಗಳಲ್ಲಿರುವ ಹಳೆಯ ತ್ಯಾಜ್ಯ ನೀರು ಶುದ್ಧೀಕರಣ ಘಟಕಗಳನ್ನು ಸಹ ಉನ್ನತೀಕರಿಸುವ ಸಲುವಾಗಿ ಮೆ॥ ಭಾರತೀಯ ವಿಜ್ಞಾನ ಸಂಸ್ಥೆಯಿಂದ ಕಾರ್ಯ ಸಾಧ್ಯತಾ ವರದಿಯನ್ನು ಪಡೆಯಲು ಕಾರ್ಯಾದೇಶ ನೀಡಲಾಗಿದೆ. ಮೆ॥ ಭಾರತೀಯ ವಿಜ್ಞಾನ ಸಂಸ್ಥೆಯಿಂದ ಕಾರ್ಯ ಸಾಧ್ಯತಾ ವರದಿಯನ್ನು ಪಡೆದ ಮೇಲೆ ವಿಸ್ತೃತವಾದ ಯೋಜನಾ ವರದಿಯನ್ನು ತಯಾರಿಸಿ, ಸದರಿ ಯೋಜನೆಗೆ ಆರ್ಥಿಕ ಸಹಾಯ ಪಡೆಯಲು ಬೆಂಗಳೂರು ಜಲಮಂಡಳಿಯು ಪ್ರಸ್ತಾವನೆ ಸಲ್ಲಿಸಿದ ನಂತರ ಪರಿಶೀಲಿಸಲಾಗುವುದು.<br><br>ಜೊತೆಗೆ ಬೆಂಗಳೂರು ಜಲ ಮಂಡಳಿಯು ಇತರೆ ಕಾಮಗಾರಿಗಳಾದ ಯಲಹಂಕ ಬಳಿಯಲ್ಲಿರುವ ಪುಟ್ಟೇನಹಳ್ಳಿಯಲ್ಲಿ ದಿನಂಪ್ರತಿ 7 ದಶಲಕ್ಷ ಲೀಟರ್ ಸಾಮರ್ಥ್ಯದ, ಮಡಿವಾಳ ಕೆರೆಯ ಬಳಿ 4 ದಶಲಕ್ಷ ಲೀಟರ್ ಸಾಮರ್ಥ್ಯದ ತ್ಯಾಜ್ಯನೀರು ಸಂಸ್ಕರಣ ಘಟಕ ಮತ್ತು ಕಗ್ಗದಾಸಪುರ ಕೆರೆಯ ಬಳಿ ದಿನಂಪ್ರತಿ 5 ದಶಲಕ್ಷ ಲೀಟರ್ ಸಾಮರ್ಥ್ಯದ ತ್ಯಾಜ್ಯನೀರು ಸಂಸ್ಕರಣ ಘಟಕವನ್ನು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಅನುದಾನ ಪಡೆದು ನಿರ್ಮಿಸಲಾಗುವುದು. ಈ ಕಾಮಗಾರಿಯನ್ನು 2021 ರ ಅಂತ್ಯದಲ್ಲಿ ಪೂರ್ಣಮಾಡಲಾಗುವುದು.<br><br>ಹೆಸರಘಟ್ಟದಲ್ಲಿ ದಿನಂಪ್ರತಿ 3 ದಶಲಕ್ಷ ಲೀಟರ್ ಸಾಮರ್ಥ್ಯದ ತ್ಯಾಜ್ಯನೀರು ಸಂಸ್ಕರಣ ಘಟಕವನ್ನು ಸರ್ಕಾರದ ಅನುದಾನದಡಿಯಲ್ಲಿ ಕೈಗೊಂಡಿದೆ. ಈ ಕಾಮಗಾರಿಯನ್ನು 2021 ರ ಅಂತ್ಯದಲ್ಲಿ ಪೂರ್ಣಮಾಡಲಾಗುವುದು.<br><br>ಬೆಳ್ಳಂದೂರು ಅಮಾನಿಕೆರೆಯ ಬಳಿ 32.5 ದಶಲಕ್ಷ ಲೀಟರ್ ದಿನಂಪ್ರತಿ ಸಾಮರ್ಥ್ಯದ ತ್ಯಾಜ್ಯ ನೀರಿನ ವೆಟ್‌ವೆಲ್ ಹಾಗೂ ರೇಚಕಯಂತ್ರ ಹಾಗೂ ಕೊಳವೆ ಮಾರ್ಗ ಅಳವಡಿಸುವ ಕಾಮಗಾರಿಯನ್ನು ಮಂಡಳಿಯು ಕೈಗೊಂಡಿದೆ. ಈ ಕಾಮಗಾರಿಯನ್ನು ಮಾರ್ಚ್ 2021 ರಲ್ಲಿ ಪೂರ್ಣಮಾಡಲಾಗುವುದು.<br><br>ಕೋವಿಡ್-19 ಮಾರಕ ರೋಗವು ಉಲ್ಬಣಗೊಂಡಿದ್ದ ಕಾರಣ ಕಾಮಗಾರಿಗಳಲ್ಲಿ ವಿಳಂಬವಾಗಿರುತ್ತದೆ. |
| ಈ. | ಸದರಿ ಅವಗಡಗಳಿಗೆ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಉಸ್ತುವಾರಿ ಸಿವಿಲ್ ಇಂಜಿನಿಯರ್‌ಗಳನ್ನು ಹೊರತುಪಡಿಸಿ ಎಲೆಕ್ಟ್ರಿಕಲ್, ಎಲೆಕ್ಟ್ರಾನಿಕ್ಸ್, ಮೆಕಾನಿಕಲ್ ಇಂಜಿನಿಯರ್ ಪದವೀಧರರನ್ನು ಮುಖ್ಯ ಇಂಜಿನಿಯರ್‌ಗಳನ್ನಾಗಿ ಹೊಂದಿರುವುದು ಕಾರಣವಲ್ಲವೇ; | ಅಲ್ಲ, ಸದರಿ ಹುದ್ದೆಗಳನ್ನು ಮಂಡಳಿಯ ವೃಂದ, ನೇಮಕಾತಿ ಮತ್ತು ಬಡ್ತಿ (ತಿದ್ದುಪಡಿ) ನಿಬಂಧನೆಗಳು-2016ರ ಷೆಡ್ಯೂಲ್ 2 ರನ್ವಯ ಮುಂಬಡ್ತಿ ಮೂಲಕ ಭರ್ತಿ ಮಾಡಲಾಗುತ್ತದೆ. |

| | | |
|---|---|---|
| ಉ. | ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಲ್ಲಿ ಸಿವಿಲ್ ಇಂಜಿನಿಯರ್‌ಗಳನ್ನು ಮುಖ್ಯ ಇಂಜಿನಿಯರ್‌ಗಳನ್ನಾಗಿ ನೇಮಕ ಮಾಡಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಳ್ಳುತ್ತದೆ? | ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಲ್ಲಿ ಮುಖ್ಯ ಅಭಿಯಂತರರ ಹುದ್ದೆಗಳನ್ನು ಭರ್ತಿ ಮಾಡಲು ಮಂಡಳಿಯ ವೃಂದ, ನೇಮಕಾತಿ ಮತ್ತು ಬಡ್ತಿ (ತಿದ್ದುಪಡಿ) ನಿಬಂಧನೆಗಳು-2016 ರ ಷೆಡ್ಯೂಲ್ 2 ರನ್ವಯ ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕಾಗಿರುತ್ತದೆ.<br>1. ಅಪರ ಮುಖ್ಯ ಅಭಿಯಂತರ ಹುದ್ದೆಯಿಂದ ಜೇಷ್ಠತೆಯ ಅನುಸಾರ ಅರ್ಹ ಅಭ್ಯರ್ಥಿಯನ್ನು ಮುಂಬಡ್ತಿ ಮೂಲಕ ಭರ್ತಿ ಮಾಡಲಾಗುವುದು.<br>2. ಅರ್ಹ ಅಭ್ಯರ್ಥಿಯು ಅಪರ ಮುಖ್ಯ ಅಭಿಯಂತರ ಹುದ್ದೆಯಲ್ಲಿ ಕನಿಷ್ಠ 2 ವರ್ಷ ಸೇವೆ ಸಲ್ಲಿಸಿರಬೇಕು. ನಿಗದಿತ ಸೇವಾ ಅರ್ಹತೆಯನ್ನು ಪೂರ್ಣಗೊಳಿಸಿರುವ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಸೇವಾರ್ಹತೆಯನ್ನು 01 ವರ್ಷಕ್ಕೆ ನಿಗಧಿಪಡಿಸಲಾಗಿದೆ.<br>3. ಪರಾಮರ್ಶಕ ಸಮಿತಿಯ (D.P.C) ಶಿಫಾರಸ್ಸಿನ ಮೇರೆಗೆ ಬೆಂಗಳೂರು ಜಲಮಂಡಳಿಯ ಸಭೆಯು ಮುಂಬಡ್ತಿ ನೀಡಲು ಸಕ್ಷಮ ಪ್ರಾಧಿಕಾರವಾಗಿರುತ್ತದೆ.<br>4. ಸದರಿ ಹುದ್ದೆಗೆ ಮುಂಬಡ್ತಿ ಹೊಂದುವ ಅಧಿಕಾರಿಗಳ ವಿರುದ್ಧ ಯಾವುದೇ ಇಲಾಖಾ/ನ್ಯಾಯಾಲಯದ ವಿಚಾರಣೆ ಪ್ರಕರಣಗಳು ಬಾಕಿ ಇರಬಾರದು.<br>5. ಪರಾಮರ್ಶಕ ಸಮಿತಿ (D.P.C) ಸಭೆಯ ಶಿಫಾರಸ್ಸಿನ ಮೇರೆಗೆ ಮಂಡಳಿಯ ಅನುಮೋದನೆ ಪಡೆದು ಬೆಂಗಳೂರು ಜಲಮಂಡಳಿಯ ಕಾಯ್ದೆ-1964 ರ ಸೆಕ್ಷನ್ 12ರ ಪ್ರಕಾರ ಸರ್ಕಾರದ ಪೂರ್ವಾನುಮೋದನೆ ಪಡೆಯಬೇಕಾಗಿರುತ್ತದೆ.<br><br>ಸಿವಿಲ್ ಇಂಜಿನಿಯರ್‌ಗಳನ್ನು ಪ್ರತ್ಯೇಕವಾಗಿ ಮುಖ್ಯ ಇಂಜಿನಿಯರ್‌ಗಳನ್ನಾಗಿ ನೇಮಕ ಮಾಡಲು ಬೆಂಗಳೂರು ಜಲಮಂಡಳಿಯಲ್ಲಿ ಯಾವುದೇ ನಿಯಮಾವಳಿಗಳಿರುವುದಿಲ್ಲ. |

**ಸಂಖ್ಯೆ: ನಅಇ 22 ಎಂಎಸ್‌ಐ 2021**

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ